

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 73(155) |
| ಮಾನ್ಯ ಸದಸ್ಯರ ಹೆಸರು | ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ) |
| ಉತ್ತರಿಸುವ ಸಚಿವರು | ಮಾನ್ಯ ಉನ್ನತ ಶಿಕ್ಷಣ ಸಚಿವರು. |
| ಉತ್ತರಿಸಬೇಕಾದ ದಿನಾಂಕ | 13.09.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಬೆಳಗಾವಿ, ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿರುವ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಪ್ರಸ್ತುತ ಖಾಲಿಯಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳ ಸಂಖ್ಯೆ ಎಷ್ಟು; (ವಿಶ್ವವಿದ್ಯಾಲಯವಾರು ವಿವರ ನೀಡುವುದು) | (see table below) |

| ವಿಶ್ವವಿದ್ಯಾಲಯದ ಹೆಸರು | ಖಾಲಿಯಿರುವ ಹುದ್ದೆಗಳು |
|---|---|
| ಕರ್ನಾಟಕ ರಾಜ್ಯ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ. | • ಬೋಧಕ –38.<br>• ಬೋಧಕೇತರ –157 |
| ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಬೆಳಗಾವಿ. | • ಬೋಧಕ –35.<br>• ಬೋಧಕೇತರ –140 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಅವುಗಳಲ್ಲಿ, ದಿನಗೂಲಿ ಮತ್ತು ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವವರ ಸಂಖ್ಯೆ ಎಷ್ಟು; ಸದರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಖಾಯಂಗೊಳಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; | (see tables below) |

| ಕರ್ನಾಟಕ ರಾಜ್ಯ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕೇತರ ಸಿಬ್ಬಂದಿಗಳ ವಿವರ | |
|---|---|
| ತಾತ್ಕಾಲಿಕ/ಬಾಹ್ಯಮೂಲ ಸಿಬ್ಬಂದಿಗಳು | 118 |
| ಗೌರವಧನ ಸಿಬ್ಬಂದಿಗಳು | 33 |
| ಪಿಡಬ್ಲ್ಯೂಜಿ-34 | 118 |

| ರಾಣಿ ಚನ್ನಮ್ಮ ವಿಶ್ವವಿದ್ಯಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳು | |
|---|---|
| ಸಂಚಿತ ವೇತನದ ಆಧಾರದ ಮೇಲೆ | 103 |

| | | |
|---|---|---|
| | | ಶ್ರೀಮತಿ ಉಮಾದೇವಿ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠವು ದಿನಾಂಕ 10.04.2006ರಂದು ದಿನಗೂಲಿ ನೌಕರರ ಸಕ್ರಮಾತಿ ಬಗ್ಗೆ ತೀರ್ಪನ್ನು ನೀಡುವಾಗ ತಾತ್ಕಾಲಿಕ ನೌಕರರನ್ನು/ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ನೌಕರರನ್ನು ಖಾಯಂ ಮಾಡುವ ಬಗ್ಗೆ ಇತ್ಯಾದಿ ಅನೇಕ ವಿಷಯಗಳ ಬಗ್ಗೆ ಚರ್ಚಿಸಿ ಪ್ರಚುರಪಡಿಸಲಾಗಿರುವ ಹಾಗೂ ವಿಶ್ವವಿದ್ಯಾಲಯಗಳೂ ಸೇರಿದಂತೆ ರಾಜ್ಯದ ಎಲ್ಲಾ ಅಂಗಸಂಸ್ಥೆಗಳಿಗೂ ಅನ್ವಯವಾಗುವ ಕಾನೂನು ತತ್ವಾಂಶದನ್ವಯ, ಸಂವಿಧಾನಾತ್ಮಕವಾಗಿ ನಿಗದಿಪಡಿಸಿದ ನೇಮಕಾತಿ ವಿಧಾನದನುಸಾರ ನೇಮಕಗೊಳ್ಳದ ವ್ಯಕ್ತಿಗಳ ಸೇವೆಯನ್ನು ಸಕ್ರಮಗೊಳಿಸಲು ಅಥವಾ ಅವರ ಸೇವೆಯನ್ನು ಖಾಯಂಗೊಳಿಸಲು ಅವಕಾಶವಿರುವುದಿಲ್ಲ. ಆದುದರಿಂದ, ಕರ್ನಾಟಕ ರಾಜ್ಯ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ ಹಾಗೂ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದಲ್ಲಿ ಹಂಗಾಮಿಯಾಗಿ, ಸಾಂದರ್ಭಿಕವಾಗಿ ಕಾರ್ಯನಿರ್ವಹಿಸಲು ಸಂಚಿತ ವೇತನದ/ಗುತ್ತಿಗೆ, ಗೌರವ ಧನದ ಪಾವತಿ, ಪಿಡಬ್ಲ್ಯೂಡಿ-34 ಆಧಾರದ ವಿವಿಧ ವಿಧಾನಗಳಲ್ಲಿ ಸೇವೆಗೆ ಪಡೆಯಲಾಗಿರುವ ವ್ಯಕ್ತಿಗಳ ಹಾಗೂ ಅರೆಕಾಲಿಕ ನೌಕರರನ್ನು ಖಾಯಂಗೊಳಿಸಲು ಸಾಧ್ಯವಾಗುವುದಿಲ್ಲ. |
| ಇ) | ಸದರಿ ಖಾಲಿಯಿರುವ ಹುದ್ದೆಗಳನ್ನು ನೇಮಕಾತಿ ಮಾಡಿಕೊಳ್ಳಲು ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು; | ಕರ್ನಾಟಕ ರಾಜ್ಯ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯದಲ್ಲಿ 10 ಬೋಧಕ ಹುದ್ದೆಗಳ ನೇಮಕಾತಿ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ ಹಾಗೂ ರಾಣಿ ಚನ್ನಮ್ಮ ವಿಶ್ವವಿದ್ಯಾಲಯಕ್ಕೆ ಕಲ್ಯಾಣ ಕರ್ನಾಟಕ ವೃಂದದ ಒಟ್ಟು 15 ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.<br>ಪ್ರಸ್ತುತ ಆರ್ಥಿಕ ನಿರ್ಬಂಧಗಳು ಜಾರಿಯಲ್ಲಿರುವುದರಿಂದ ಖಾಲಿಯಿರುವ ಹುದ್ದೆಗಳ ನೇಮಕಾತಿ ಪ್ರಕ್ರಿಯೆಗಳು ವಿಳಂಬವಾಗಿರುತ್ತವೆ. |

| | | |
|---|---|---|
| ಈ) | ಯಾವ ಕಾಲಮಿತಿಯಲ್ಲಿ ಸದರಿ ಹುದ್ದೆಗಳನ್ನು ನೇಮಕಾತಿ ಮಾಡಿಕೊಳ್ಳಲಾಗುವುದು? | ಆರ್ಥಿಕ ನಿರ್ಬಂಧಗಳು ಸಡಿಲಿಕೆಯಾದ ತರುವಾಯದಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಖಾಲಿಯಿರುವ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುವುದು. |

ಸಂಖ್ಯೆ: ಇಡಿ 192 ಯುಆರ್‌ಸಿ 2021

(ಡಾ. ಅಶ್ವತ್ ನಾರಾಯಣ ಸಿ.ಎನ್)
ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ ವಿಜ್ಞಾನ
ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು